KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೨೪, ೨೦೧೧ (ಫಾಲ್ಗುಣ ೫ ಶಕ ವರ್ಷ ೧೯೩೨) | ಸಂಚಿಕೆ ೮ |
|---|---|---|

## ಭಾಗ–೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್.ಡಿ.578 ಟಿಆರ್ಎಂ 2010, ಬೆಂಗಳೂರು, ದಿನಾಂಕ:25ನೇ ಜನವರಿ, 2011**

ಕರ್ನಾಟಕ ಭೂ ಕಂದಾಯ ನಿಯಮಾವಳಿ, 1966 ನಿಯಮ 147(ಸಿ) ರೊಡನೆ ಓದಲಾದ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ 194ನೆಯ ಪ್ರಕರಣದ (1)ನೇ ಉಪ ಪ್ರಕರಣದ (ii)ನೇ ಬಾಬ್ತಿನಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಜಿಲ್ಲಾಧಿಕಾರಿಗಳು, ದಾವಣಗೆರೆ ಇವರು ಹೊರಡಿಸಿರುವ ಅಧಿಸೂಚನೆ ಸಂಖ್ಯೆ:ಡಿ.ಸಿ.ಬಿ. ಆಣೇವಾರಿ/09–10, ದಿನಾಂಕ:–.1.2010ನ್ನು ಆಧರಿಸಿ ದಾವಣಗೆರೆ ಜಿಲ್ಲೆಯ ಜಗಳೂರು, ದಾವಣಗೆರೆ, ಹೊನ್ನಾಳಿ, ಹರಿಹರ ತಾಲ್ಲೂಕುಗಳಲ್ಲಿನ 2009–10ನೇ ಸಾಲಿನಲ್ಲಿ ಬೆಳೆಗಳು ನಷ್ಟವಾಗಿರುವ 4 ತಾಲ್ಲೂಕುಗಳ 338 ಮುಂಗಾರಿ ಗ್ರಾಮಗಳಲ್ಲಿ ಪ್ರತಿ ಎಕರೆಗೆ ಸರಾಸರಿ ಉತ್ಪತ್ತಿಯು ಶೇಕಡಾ 25ಕ್ಕಿಂತ ಹೆಚ್ಚು, ಆದರೆ, ಶೇಕಡಾ 50ಕ್ಕಿಂತ ಕಡಿಮೆ ಇದ್ದುದರಿಂದ ಅರ್ಧ ಭೂ ಕಂದಾಯ ಮೊತ್ತ ರೂ.1,34,505.62 (ರೂಪಾಯಿ ಒಂದು ಲಕ್ಷದ ಮೂವತ್ತನಾಲ್ಕು ಸಾವಿರದ ಐದು ನೂರ ಐದು ಮತ್ತು ಪೈಸೆ ಅರವತ್ತೆರಡು ಮಾತ್ರ)ಗಳನ್ನು ಕರ್ನಾಟಕ ಸರ್ಕಾರವು ಮನ್ನಾ ಮಾಡಿದೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ಬೆಳೆಗಳ ಆಣೇವಾರಿ ಪ್ರಮಾಣ | | ಮನ್ನಾ ಮಾಡಬೇಕಾದ ಭೂ ಕಂದಾಯದ ಪ್ರಮಾಣ (ರೂ.ಗಳಲ್ಲಿ) | |
|---|---|---|---|---|---|
| 1 | 2 | 3 | 4 | 5 | 6 |
| 1. | ಜಗಳೂರು | – | 171 ಗ್ರಾಮಗಳು | – | 29,432.85 |
| 2. | ದಾವಣಗೆರೆ | – | 16 ಗ್ರಾಮಗಳು | – | 20,020.00 |
| 3. | ಹೊನ್ನಾಳಿ | – | 140 ಗ್ರಾಮಗಳು | – | 78,326.93 |
| 4. | ಹರಿಹರ | – | 11 ಗ್ರಾಮಗಳು | – | 6,725.84 |
| | **ಒಟ್ಟು** | | **338 ಗ್ರಾಮಗಳು** | – | **1,34,505.62** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.48

**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಕಂದಾಯ)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 81 ಎಲ್ಆರ್ಎಂ 2010, ಬೆಂಗಳೂರು, ದಿನಾಂಕ:25ನೇ ಜನವರಿ, 2011**

ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್–ಯೂನಿಟ್ ರಾಜಶ್ರೀ ಸಿಮೆಂಟ್ ವರ್ಕ್ಸ್, ಗುಲ್ಬರ್ಗಾ ಜಿಲ್ಲೆ, ಇವರಿಗೆ ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕಿನ ಹಂಗನಹಳ್ಳಿ ಮತ್ತು ಮಳಖೇಡ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 425 ಎಕರೆ 30 ಗುಂಟೆ ಕೃಷಿ ಜಮೀನನ್ನು ಕೈಗಾರಿಕಾ ಉದ್ದೇಶದ ಸಲುವಾಗಿ ಅರ್ಜಿ ನಮೂನೆ 15–ಎ ಮತ್ತು ನಮೂನೆ–15–ಎಎ, ರಲ್ಲಿನ ಮಾಹಿತಿಗಳನ್ನು ಅನುಸರಿಸಿ ಜಿಲ್ಲಾಧಿಕಾರಿ, ಗುಲ್ಬರ್ಗಾ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂದಾಯ:ಭೂಸು/56/2009–10, ದಿನಾಂಕ:28.09.2010ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನುಗಳನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109(1)ರಡಿ ಅನುಮೋದನೆ/ ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಗೆ ಪಡೆಯಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಸದರಿ ಜಮೀನುಗಳ ಮಧ್ಯದಲ್ಲಿ ಬರುವಂತಹ 41.31 ಎಕರೆ/ ಗುಂಟೆ ಸರ್ಕಾರಿ ಹಾಗೂ ಇನಾಂ ಜಮೀನುಗಳನ್ನು ಕರ್ನಾಟಕ ಭೂ ಕಂದಾಯ ಕಾಯ್ದೆಯಂತೆ ಪರಿಶೀಲಿಸುವ ಪ್ರಕ್ರಿಯೆಗೆ ಒಳಪಡಿಸಿ ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್–ಯೂನಿಟ್ ರಾಜಶ್ರೀ ಸಿಮೆಂಟ್ ವರ್ಕ್ಸ್, ಗುಲ್ಬರ್ಗಾ ಜಿಲ್ಲೆ, ಇವರಿಗೆ ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕಿನ ಹಂಗನಹಳ್ಳಿ ಮತ್ತು ಮಳಖೇಡ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 383 ಎಕರೆ 39 ಗುಂಟೆ ಕೃಷಿ ಜಮೀನನ್ನು ಕೈಗಾರಿಕಾ ಉದ್ದೇಶದ ಸಲುವಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಹೊರತುಪಡಿಸಲಾಗಿದೆ.
4) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
6) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
7) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
8) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
9) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

ಪಿ.ಆರ್. 44

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 71 ಎಲ್‌ಆರ್‌ಎಂ 2010, ಬೆಂಗಳೂರು, ದಿನಾಂಕ:17ನೇ ಸೆಪ್ಟೆಂಬರ್, 2010**

ಮೆ: ಕೀರ್ತಿ ಇಂಡಸ್ಟ್ರೀಸ್ ಲಿಮಿಟೆಡ್, ಹೈದರಾಬಾದ್, ಇವರಿಗೆ ಯಾದಗಿರಿ ಜಿಲ್ಲೆ, ಯಾದಗಿರಿ ತಾಲ್ಲೂಕಿನ ಮುಸ್ಟೂರು ಸರ್ವೆ ನಂ.153 ಮತ್ತು ಇತರೆಗಳಲ್ಲಿ ಒಟ್ಟು 98 ಎಕರೆ 04 ಗುಂಟೆ ಕೃಷಿ ಜಮೀನನ್ನು ಕೈಗಾರಿಕಾ ಘಟಕ ಅಂದರೆ ಸಕ್ಕರೆ ಕಾರ್ಖಾನೆ ವಿದ್ಯುತ್ ಘಟಕ ಸ್ಥಾಪನೆ ಸಲುವಾಗಿ ಕೋರಿ ನಮೂನೆ 15–ಎ ಮತ್ತು ನಮೂನೆ 15–ಎಎ ರಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಯಾದಗಿರಿ ಜಿಲ್ಲೆ, ಇವರ ಪತ್ರ ಸಂಖ್ಯೆ:ಕಂ/ಭೂಸು/141/07–08/2497 ದಿನಾಂಕ:12.07.2010ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನುಗಳನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109(1)ರಡಿ ಅನುಮೋದನೆ/ ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಗೆ ಪಡೆಯಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯ ಪ್ರಕಾರ ಮೆ: ಕೀರ್ತಿ ಇಂಡಸ್ಟ್ರೀಸ್ ಲಿಮಿಟೆಡ್, ಹೈದರಾಬಾದ್, ಇವರಿಗೆ ಯಾದಗಿರಿ ಜಿಲ್ಲೆ, ಯಾದಗಿರಿ ತಾಲ್ಲೂಕಿನ ಮುಸ್ಟೂರು ಗ್ರಾಮದ ಸರ್ವೆ ನಂ.153 ಮತ್ತುಇತರೆಗಳಲ್ಲಿ ಒಟ್ಟು 98 ಎಕರೆ 04 ಗುಂಟೆ ಕೃಷಿ ಜಮೀನನ್ನು ಕೈಗಾರಿಕಾ ಘಟಕ ಅಂದರೆ ಸಕ್ಕರೆ ಕಾರ್ಖಾನೆ ವಿದ್ಯುತ್ ಘಟಕ ಸ್ಥಾಪನೆ ಸಲುವಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

ಪಿ.ಆರ್. 45

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 65 ಎಲ್‌ಆರ್‌ಎಂ 2010, ಬೆಂಗಳೂರು, ದಿನಾಂಕ:14ನೇ ಜನವರಿ, 2011**

ನಿಟ್ಟೆ ಎಜುಕೇಷನ್ ಟ್ರಸ್ಟ್ (ರಿ), ಮಂಗಳೂರು, ಇವರು ಬೆಂಗಳೂರು ಉತ್ತರ ತಾಲ್ಲೂಕು ಯಲಹಂಕ ಹೋಬಳಿ, ಗೋವಿಂದಪುರ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿ ಒಟ್ಟು 1 ಎಕರೆ 26 ಗುಂಟೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಎಲ್‌ಆರ್‌ಎಫ್(109)(ಎನ್‌ಎ) ಸಿಆರ್.20/2009–10 ದಿನಾಂಕ:23.06.2010ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ (ತಿದ್ದುಪಡಿ) 2005ರ ಕಲಂ 109(1)(ಎ)ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಸಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ನಿಟ್ಟೆ ಎಜುಕೇಷನ್ ಟ್ರಸ್ಟ್ (ರಿ), ಮಂಗಳೂರು, ಇವರು ಬೆಂಗಳೂರು ಉತ್ತರ ತಾಲ್ಲೂಕು ಯಲಹಂಕ ಹೋಬಳಿ, ಗೋವಿಂದಪುರ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿ ಒಟ್ಟು 1 ಎಕರೆ 26 ಗುಂಟೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

ಪಿ.ಆರ್. 46

**ಜಿಲ್ಲಾಧಿಕಾರಿಯವರ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಭೂ ಸ್ವಾಧೀನ ಅಧಿನಿಯಮ 1894 (ತಿದ್ದುಪಡಿ ಅಧಿನಿಯಮ 1984) ಕಲಂ 4(1)ರ ಮೇರೆಗೆ ಅಧಿಸೂಚನೆ**

**ಕ್ರಮಾಂಕ: ಎಲ್ಎಕ್ಯೂ ಎಸ್ಆರ್ 1/2009-10, ದಿನಾಂಕ:12ನೇ ಜನವರಿ, 2011**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಜಮೀನು ಒಂದು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಕೋಲಾರ-ಚಿಕ್ಕಬಳ್ಳಾಪುರ ರೈಲ್ವೆ ಗೇಜ್ ಪರಿವರ್ತನೆಗಾಗಿ ಅಗತ್ಯವಾಗಲಿವೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡುಬಂದಿರುವುದರಿಂದ.

ಕರ್ನಾಟಕ ಅಧಿನಿಯಮ, 1961 (17ರ) ಮೂಲಕ ತಿದ್ದುಪಡಿಯಾದ ಭೂ ಸ್ವಾಧೀನ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ: 1984ರ) 4ನೇ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸುಗಳನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂ ಸ್ವಾಧೀನಾಧಿಕಾರಿ ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡುತ್ತದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5-ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರನ್ನು ನೇಮಕ ಮಾಡಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು, ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಈ ಅಧಿಸೂಚನೆ ಜಾರಿಯಾದ ಮೂವತ್ತು ದಿನಗಳ ಒಳಗಾಗಿ ಅಥವಾ ಅದಕ್ಕೆ ಮುಂದೆ, ಕರ್ನಾಟಕ ಅಧಿನಿಯಮ, 1961ರ 17ರ ಮೂಲಕ ತಿದ್ದುಪಡಿಯಾದ ಭೂ ಸ್ವಾಧೀನ ಅಧಿನಿಯಮ, 1894ರ 3(ಸಿ) ಪ್ರಕರಣದ ಮೇರೆಗೆ, ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಸ್ವಾಧೀನ ಉದ್ದೇಶಕ್ಕಾಗಿ, ಸದರಿ ಭೂಮಿಗಳ ಮೇಲೆ ನಿಯೋಜಿತವಾದ ಯಾವನೇ ಮೋಜಣಿದಾರ ಅಥವಾ ಅವರ ಕಾರ್ಯದರ್ಶಿದಲ್ಲಿ ಹಸ್ತಕ್ಷೇಪ, ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ಅಧಿಸೂಚನೆಯು ಪ್ರಕಟವಾದ ನಂತರ ಚಿಕ್ಕಬಳ್ಳಾಪುರ ಜಿಲ್ಲಾಧಿಕಾರಿಗಳ ಪೂರ್ವಾನುಮತಿಯಿಲ್ಲದೆ ಈ ಜಮೀನುಗಳ ಮಾರಾಟ, ಜಿ.ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇವಾರಿ ಮಾಡಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಸ್ವಾಧೀನಮಾಡಿಕೊಳ್ಳಲಾಗುವ ಸದರಿ ಭೂಮಿಗಳ ಅಧಿಕಾರಿಯ ಸದರಿ ಅಧಿನಿಯಮದ (7ನೇ ಖಂಡದ) 2ನೇಯ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ಕಛೇರಿಯಲ್ಲಿ ಈ ಜಮೀನುಗಳ ಸ್ಥೂಲ ನಕಾಶೆಗಳನ್ನು ಪರಿಶೀಲನೆಗೆ ಇಡಲಾಗಿರುತ್ತದೆ.

**ಅನುಸೂಚಿ**

**ಜಿಲ್ಲೆ: ಚಿಕ್ಕಬಳ್ಳಾಪುರ ತಾಲ್ಲೂಕು: ಚಿಂತಾಮಣಿ ಹೋಬಳಿ: ಕಸಬಾ ಗ್ರಾಮ: ದೊಡ್ಡಗಂಜೂರು**

| ಕ್ರ.ಸಂ. | ಖಾತೆದಾರರ ಹೆಸರು/ ಅನುಭವದಾರರ ಹೆಸರು | ಸ.ನಂ. | ತರಹೆ | ಚೆಕ್ಕುಬಂದಿ | | | | ಭೂ ಸ್ವಾಧೀನ ವಿವರ | |
|---|---|---|---|---|---|---|---|---|---|
| | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ-ಗುಂ | ಆಕಾರ ರೂ-ಪೈ |
| 1 | 2 | 3 | 4 | 5 | 6 | 7 | 8 | 9 | 10 |
| 1. | ಕೆ.ಆರ್. ನಾರಾಯಣಸ್ವಾಮಿ ಬಿನ್ ವೆಂಕಟರಾಮನ್ನ | 225/9 | ಖುಷ್ಕಿ | ಕೃಷ್ಣಪ್ಪ, ರಾಮಯ್ಯ | ನಾಗಮ್ಮ ಕೋಂ ಲೇಟ್ ವೆಂಕಟರಾಮಪ್ಪ | ಕೆ.ಆರ್. ನಾರಾಯಣಪ್ಪ ಸ್ವಂತ | ರೈಲ್ವೆ ರಸ್ತೆ | 0-06 | 0-32 |
| 2. | ನಾಗಮ್ಮ ಕೋಂ ಲೇಟ್ ಮುನಿವೆಂಕಟರೆಡ್ಡಿ | 226 | ಖುಷ್ಕಿ | ಕೆ.ಆರ್. ನಾರಾಯಣಸ್ವಾಮಿ ಬಿನ್ ವೆಂಕಟರಾಮನ್ನ | ಚಿಕ್ಕಗಂಜೂರು ಗಡಿ | ನಾಗಮ್ಮ ರವರ ಸ.ನಂ.226ರ ಉಳಿಕೆ | ರೈಲ್ವೆ ರಸ್ತೆ | 0-04 | 0-21 |

| ಕ್ರ.ಸಂ. | ಖಾತೆದಾರರ ಹೆಸರು/ ಅನುಭವದಾರರ ಹೆಸರು | ಸ.ನಂ. | ತರಹೆ | ಚೆಕ್ಕುಬಂದಿ | | | | ಭೂ ಸ್ವಾಧೀನ ವಿವರ | |
|---|---|---|---|---|---|---|---|---|---|
| | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
| 1 | 2 | 3 | 4 | 5 | 6 | 7 | 8 | 9 | 10 |
| 3. | 1. ಕೃಷ್ಣಪ್ಪ ಬಿನ್ ಮುನಿಶಾಮಿ 2. ರಾಮಯ್ಯ ಬಿನ್ ಮುನಿಶಾಮಿ | 229/1 | ಖುಷ್ಕಿ | ನಾರಾಯಣಮ್ಮ ಬಿನ್ ಮುನೆಪ್ಪ | ಕೆ.ಆರ್. ನಾರಾಯಣಸ್ವಾಮಿ ಬಿನ್ ವೆಂಕಟರಾಮನ್ನ | ಕೃಷ್ಣಪ್ಪ | ರೈಲ್ವೆ ರಸ್ತೆ | 0–04 | 0–25 |
| 4. | ನಾರಾಯಣಪ್ಪ ಬಿನ್ ಮುನೆಪ್ಪ | 229/2 | ಭಾಗಾಯ್ತು | ಶಾನುಭೋಗ ನೌಕರಿ ಇನಾಂತಿ | ಕೃಷ್ಣಪ್ಪ | ನಾರಾಯಣಮ್ಮ | ರೈಲ್ವೆ ರಸ್ತೆ | 0–09 | 0–98 |
| 5. | ಶಾನುಭೋಗ ನೌಕರಿ ಇನಾಂತಿ | 230 | ಖುಷ್ಕಿ | ಸರ್ಕಾರಿ ಕೆರೆ | ನಾರಾಯಣಮ್ಮ ಬಿನ್ ಮುನೆಪ್ಪ | ಸ.ನಂ.230ರ ಉಳಿಕೆ | ರೈಲ್ವೆ ರಸ್ತೆ | 0–03 | 0–14 |
| 6. | ನಂಜಪ್ಪ ಬಿನ್ ಮುನಿಶಾಮಿ | 231 | ಖುಷ್ಕಿ | ಎಸ್.ರಾಮಪ್ಪ ಬಿನ್ ಚಿಕ್ಕಣ್ಣ | ಶಾನುಭೋಗ ನೌಕರಿ ಇನಾಂತಿ | ಸರ್ಕಾರಿ ಕೆರೆ | ರೈಲ್ವೆ ರಸ್ತೆ | 0–04 | 0–20 |
| 7. | ಎಸ್. ರಾಮಪ್ಪ ಬಿನ್ ಚಿಕ್ಕಣ್ಣ | 232 | ಖುಷ್ಕಿ | ಸರ್ಕಾರಿ ಕಾಲುವೆ | ನಂಜಪ್ಪ ಬಿನ್ ಮುನಿಶಾಮಿ ಮತ್ತು ಸ.ನಂ.23 | ಸರ್ಕಾರಿ ಕೆರೆ | ರೈಲ್ವೆ ರಸ್ತೆ | 0–11 | 0–55 |
| | | | | | ಒಟ್ಟು | | | **1–01** | |

ಜಿಲ್ಲಾಧಿಕಾರಿಗಳು,

ಪಿ.ಆರ್.28

ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ:53 ಭೂಸ್ವಾತು: 2010, ದಿನಾಂಕ:7ನೇ ಜನವರಿ, 2011**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹೊಸಕೆರೆ ತಾವರೇಕೆರೆ ಜಿಲ್ಲಾ ಮುಖ್ಯರಸ್ತೆ ನಿರ್ಮಾಣಕ್ಕಾಗಿ ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894ರ ಕಲಂ 4(1)ರ ಮೇರೆಗೆ ಅಧಿಸೂಚನೆ ಕ್ರಮಾಂಕ:ಎಲ್‌ಎಕ್ಯೂ: ಎಸ್.ಆರ್:42:2009–10 ದಿನಾಂಕ:22.10.2009ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ ಮತ್ತು ಕರ್ನಾಟಕ ಕಾಯ್ದೆ 33:1991 ರನ್ವಯ ತಿದ್ದುಪಡಿಯಾದ ಭೂಅರ್ಜನೆ ಅಧಿನಿಯಮ 1894ರ (ಕೇಂದ್ರ ಅಧಿನಿಯಮ 1894 ರ (1) 5ಎ ಪ್ರಕರಣದ (2)ನೇ ಉಪಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಅರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿದೆ ಎಂದು ಸದರಿ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ಉಪ ವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು, ಮಧುಗಿರಿ ಉಪವಿಭಾಗ, ಮಧುಗಿರಿ ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂಅರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಅರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ಉಪ ವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು, ಮಧುಗಿರಿ ಉಪವಿಭಾಗ, ಮಧುಗಿರಿರವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

ಜಿಲ್ಲೆ: ತುಮಕೂರು ತಾಲ್ಲೂಕು: ಶಿರಾ ಹೋಬಳಿ: ಬುಕ್ಕಾಪಟ್ಟಣ ಗ್ರಾಮ: ತುಪ್ಪದಕೋಣ

| ಕ್ರ.ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಚೆಕ್ಕುಬಂದಿ | | | | ಸ.ನಂ. | ತರಹೆ | ವಿಸ್ತೀರ್ಣ ಎ–ಗುಂ | ಆಕಾರ ರೂ–ಪೈ |
|---|---|---|---|---|---|---|---|---|---|---|
| | | | ಉತ್ತರ | ದಕ್ಷಿಣ | ಪೂರ್ವ | ಪಶ್ಚಿಮ | | | | |
| **1** | **2** | **3** | **4ಎ** | **4ಬಿ** | **4ಸಿ** | **4ಡಿ** | **5** | **6** | **7** | **8** |
| 1. | ಪುಟ್ಟಮ್ಮ ಕೋಂ ಕರೇಸಿದ್ದಯ್ಯ | ಪುಟ್ಟಮ್ಮ ಕೋಂ ಕರೇಸಿದ್ದಯ್ಯ | ಸ.ನಂ.18/3ರ ಉಳಿಕೆ | ಸ.ನಂ.18/16, ಸಣ್ಣದ್ಯಾಮಪ್ಪ ಬಿನ್ ದ್ಯಾಮಪ್ಪ | ಸ.ನಂ.18/3ರ ಉಳಿಕೆ | ಸ.ನಂ.18/4 ಪುಟ್ಟಯ್ಯ ಬಿನ್ ಬೆಂಚೆ ದ್ಯಾಮಯ್ಯ | 18/3 | ಖುಷ್ಕಿ | 0–03 3/4 | 0–08 |
| 2. | ಸಣ್ಣದ್ಯಾಮ ಬಿನ್ ದ್ಯಾಮಯ್ಯ | ಸಣ್ಣದ್ಯಾಮಯ್ಯ ಬಿನ್ ದ್ಯಾಮಯ್ಯ | ಸ.ನಂ.18/3ರ ಜಮೀನು | ಲಾಗು ಸ.ನಂ.17ರ ಜಮೀನು | ಎಂ.ಪಿ. ಪುಟ್ಟರಾಜು ಸ.ನಂ.18/5, 18/6ರ ಜಮೀನು | ಸ.ನಂ.18/4 ಪುಟ್ಟಯ್ಯ ಬಿನ್ ಬೆಂಚೆ ದ್ಯಾಮಯ್ಯ | 18/16 | ಖುಷ್ಕಿ | 0–21 | 0–44 |
| | | | | | | | | **ಒಟ್ಟು** | **0–24 3/4** | **0–52** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.36

**ಎಂ. ವೆಂಕಟೇಶ್‌ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಕಾಯಿದೆಯ ಕಲಂ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ:35 ಭೂಸ್ವಾಚ: 2010, ದಿನಾಂಕ:21ನೇ ಜನವರಿ, 2011**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಕಂದಿಕೆರೆ ಗ್ರಾಮದ ಭೂಮಿಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹಿರಿಯೂರು ತಾಲ್ಲೂಕು ಐಮಂಗಳ ಹೋಬಳಿ ಗೂಡ್ನರಹಳ್ಳಿ ಹೊಸಕೆರೆ ನೀರು ಮುಳುಗಡೆಯಾಗಿರುವ ಸಾರ್ವಜನಿಕ ಹಿತಾಸಕ್ತಿಗೆ ಅನುಗುಣವಾಗಿ ಅಗತ್ಯವಾಗಿ ಇದೆ ಎಂದು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲಾ, ಚಿತ್ರದುರ್ಗ ಇವರು ಭೂ ಸ್ವಾಧೀನ ಕಾಯ್ದೆ 1894ರ ಕಲಂ 4(1)ರ ಮೇರೆಗೆ ಅಧಿಸೂಚನೆ ಕ್ರಮಾಂಕ ಎಲ್.ಎ.ಕ್ಯೂ:ಎಸ್ಆರ್:61/2009–10 ದಿನಾಂಕ:16.01.2010 ರನ್ವಯದ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿದ್ದರಿಂದ,

ಮತ್ತು ಕರ್ನಾಟಕ ಭೂ ಸ್ವಾಧೀನ ಕಾಯ್ದೆ 33/1991ರನ್ವಯ ತಿದ್ದುಪಡಿಯಿಂದ ಅರ್ಜನೆಯ ಅಧಿನಿಯಮ 1894 (ಕೇಂದ್ರ) ಅಧಿನಿಯಮ ಸಂಖ್ಯೆ 1894 5(ಎ) ಪ್ರಕರಣ (2)ನೇ ಉಪ ಪ್ರಕರಣದ ಹಾಗೂ ಕಲಂ 6(1ಎ)ರ ಪ್ರಕರಣದ ಮೇರೆಗೆ ಸಲ್ಲಿಸಿದ ವರದಿಯನ್ನು ಪರಿಶೀಲಿಸಿದ ನಂತರ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಜಮೀನುಗಳನ್ನು ಭೂ ಸ್ವಾಧೀನ ಮಾಡಿಕೊಳ್ಳುವ ಅವಶ್ಯವಿದೆ ಎಂದು ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಜಮೀನುಗಳನ್ನು ಅಗತ್ಯವಾಗಿದೆ ಎಂದು ಸದರಿ ಅಧಿನಿಯಮದ ಕಲಂ 6(1)ನೇ ಪ್ರಕರಣದ ಮೇರೆಗೆ ಮೂಲಕ ಘೋಷಿಸಲಾಗಿದೆ.

ಉಪವಿಭಾಗಾಧಿಕಾರಿಗಳು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರನ್ನು ಸದರಿ ಭೂ ಸ್ವಾಧೀನ ಜಮೀನುಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳಲ್ಲಿ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯವನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಸ್ವಾಧೀನದ ಅಧಿನಿಯಮದ (3)ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ.

ಹಾಗೂ ಸದರಿ ಜಮೀನುಗಳ ಭೂ ಸ್ವಾಧೀನ (ಅರ್ಜನೆಗೆ) ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ. ಸದರಿ ಭೂಮಿಗಳ ನಕ್ಷೆಗಳನ್ನು ಪರಿವೀಕ್ಷಣೆಗಾಗಿ ಉಪ ವಿಭಾಗಾಧಿಕಾರಿಗಳು ಹಾಗೂ ಭೂ ಸ್ವಾಧೀನಾಧಿಕಾರಿಗಳು ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಕಾಯ್ದಿರಿಸಲಾಗಿದೆ.

**ಅನುಸೂಚಿ**

**ಜಿಲ್ಲೆ: ಚಿತ್ರದುರ್ಗ** **ತಾಲ್ಲೂಕು: ಹಿರಿಯೂರು** **ಹೋಬಳಿ: ಐಮಂಗಲ** **ಗ್ರಾಮ: ಕಂದಿಕೆರೆ**

| ಕ್ರ. ಸಂ. | ಖಾತೆದಾರರ ಹೆಸರು, ವಿಳಾಸ | ಅನುಭವದಾರರ ಹೆಸರು, ವಿಳಾಸ | ಗ್ರಾಮದ ಹೆಸರು | ಸರ್ವೆ ನಂ. | ತರಹೆ | ಜಮೀನುಗಳ ಚೆಕ್ಕುಬಂದಿ ವಿವರಗಳು | | | | ಭೂ ಸ್ವಾಧೀನಪಡಿಸಿ ಕೊಳ್ಳುವ ವಿಸ್ತೀರ್ಣ (ಎ–ಗುಂ) | ಆಕಾರ (ರೂ–ಪೈ) |
|---|---|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| **1** | **2** | **3** | **4** | **5** | **6** | **7** | **8** | **9** | **10** | **11** | **12** |
| 1.<br>2.<br>3. | ಆರ್. ಮನೋಹರಮೂರ್ತಿ ಬಿನ್ ಸಿ. ರಾಜಶೇಖರಪ್ಪ<br>ಆರ್. ಪ್ರಕಾಶ ಬಿನ್ ಸಿ.ರಾಜಶೇಖರಪ್ಪ<br>ಆರ್. ರವೀಂದ್ರರಾಜು ಬಿನ್ ಸಿ. ರಾಜಶೇಖರಪ್ಪ | ಆರ್. ಮನೋಹರಮೂರ್ತಿ ಬಿನ್ ಸಿ. ರಾಜಶೇಖರಪ್ಪ<br>ಆರ್. ಪ್ರಕಾಶ ಬಿನ್ ಸಿ.ರಾಜಶೇಖರಪ್ಪ<br>ಆರ್. ರವೀಂದ್ರರಾಜು ಬಿನ್ ಸಿ. ರಾಜಶೇಖರಪ್ಪ | ಕಂದಿಕೆರೆ | 165/6ಎ | ಖುಷ್ಕಿ | ಗೂಡ್ನೂರ ಹಳ್ಳಿ ಗಡಿ | ಲಾಗ್ ನಂ.166 | ಲಾಗ್ ನಂ.6ಬಿ | ಲಾಗ್ ನಂ.167 169 | 2–32 | 1–50 |
| 1.<br>2.<br>3. | ಆರ್. ಮನೋಹರಮೂರ್ತಿ ಬಿನ್ ಸಿ. ರಾಜಶೇಖರಪ್ಪ<br>ಆರ್. ಪ್ರಕಾಶ ಬಿನ್ ಸಿ.ರಾಜಶೇಖರಪ್ಪ<br>ಆರ್. ರವೀಂದ್ರರಾಜು ಬಿನ್ ಸಿ. ರಾಜಶೇಖರಪ್ಪ | ಆರ್. ಮನೋಹರಮೂರ್ತಿ ಬಿನ್ ಸಿ. ರಾಜಶೇಖರಪ್ಪ<br>ಆರ್. ಪ್ರಕಾಶ ಬಿನ್ ಸಿ.ರಾಜಶೇಖರಪ್ಪ<br>ಆರ್. ರವೀಂದ್ರರಾಜು ಬಿನ್ ಸಿ. ರಾಜಶೇಖರಪ್ಪ | ಕಂದಿಕೆರೆ | 165/6ಬಿ | ಖುಷ್ಕಿ | ಲಾಗ್ ನಂ.162 ಮತ್ತು ಗೂಡ್ನೂರ ಹಳ್ಳಿ ರಸ್ತೆ | ಲಾಗ್ ನಂ.166 | ಲಾಗ್ ನಂ.6ಎ | ಲಾಗ್ ನಂ.6ಎ | 0–32 | 0–41 |
| | | | | | | | **ಜುಮ್ಲಾ** | | | **3–24** | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.37

**ಎಂ. ವೆಂಕಟೇಶ್‌ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)